# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 832 (927)

2) ಸದಸ್ಯರ ಹೆಸರು : ಶ್ರೀ ಪ್ರಾಣೇಶ್ ಎಂ.ಕೆ.
(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 28-09-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನಲ್ಲಿ ಕಾಡಾನೆ ಹಾವಳಿಯಿಂದ ಅನೇಕ ಕಾಫಿ, ಬಾಳೆ, ಏಲಕ್ಕಿ, ಭತ್ತ ಬೆಳೆಗಳು ಹಾಗೂ ಮನೆ ಜನರಿಗೆ ಆಗುತ್ತಿರುವ ತೊಂದರೆಯನ್ನು ತಡೆಯಲು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು; (ವಿವರ ನೀಡುವುದು) | ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನಲ್ಲಿ ಕಾಡಾನೆ ಹಾವಳಿಯಿಂದ ಆಗುತ್ತಿರುವ ತೊಂದರೆಯನ್ನು ತಡೆಯಲು ಕೈಗೊಂಡಿರುವ ಕ್ರಮಗಳ ವಿವರ ಈ ಕೆಳಕಂಡಂತಿದೆ.<br><br>1. ಮೂಡಿಗೆರೆ ತಾಲ್ಲೂಕಿನಲ್ಲಿ ಕಾಡಾನೆ ಹಾವಳಿ ತಡೆಯಲು ಪ್ರತಿ ವರ್ಷ ಕಾಡಾನೆ ಓಡಿಸುವ ತಂಡಗಳನ್ನು ರಚಿಸಿಕೊಂಡು, ಆನೆ ಬಂದ ಸಮಯದಲ್ಲಿ ಕಾಡಿಗೆ ಹಿಮ್ಮೆಟ್ಟಿಸುವ ಕೆಲಸ ಮಾಡಲಾಗುತ್ತದೆ.<br>2. ಮೂಡಿಗೆರೆ ವಲಯದಲ್ಲಿ ಕಾಡಾನೆಗಳು ಹಿಡುವಳಿ ಪ್ರದೇಶಕ್ಕೆ ಬರದಂತೆ 10 ಕಿ.ಮೀ. ಉದ್ದಕ್ಕೆ ಟೆಂಟಕಲ್ ಫೆನ್ಸಿಂಗ್ ನಿರ್ಮಿಸಲಾಗಿದೆ.<br>3. ಮೂಡಿಗೆರೆ ವಲಯದಲ್ಲಿ ಕಾಡಾನೆಗಳು ದಾಟದಂತೆ ಆನೆ ತಡೆ ಕಂದಕ ತೆಗೆಯಲಾಗಿದೆ ಹಾಗೂ ಅವುಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ.<br>4. ರೈತರ ಜಮೀನಿಗೆ ಆನೆಗಳು ಪ್ರವೇಶಿಸದಂತೆ ಸೋಲಾರ್ ಫೆನ್ಸಿಂಗ್ ನಿರ್ಮಾಣ ಮಾಡಿಕೊಡಲಾಗಿದೆ.<br>5. ಕಾಡಾನೆಗಳು ಹಿಡುವಳಿ ಪ್ರದೇಶಕ್ಕೆ ಬರದಂತೆ ಆರ್.ಸಿ.ಸಿ. ಪಿಲ್ಲರ್ಸ್ ನಿರ್ಮಿಸಲಾಗಿದೆ.<br>6. ಕಾಡಾನೆ ಓಡಿಸುವ ತಂಡಕ್ಕೆ ಶೆಲ್ಟರ್ ಸ್ಟೇಷನ್‌ಗಳನ್ನು ನಿರ್ಮಿಸಲಾಗಿದೆ.<br>7. ಕಾಡಿನ ಮಧ್ಯದಲ್ಲಿ ಹಳೆಯ ಕೆರೆಗಳ ಹೂಳೆತ್ತುವುದು ಹಾಗೂ ಕೆರೆ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನಲ್ಲಿ ಕಾಡಾನೆ ಹಾವಳಿ ತಡೆಯಲು ಸರ್ಕಾರ ಇಲ್ಲಿಯವರೆಗೆ ಯಾವ ಯೋಜನೆ ರೂಪಿಸಿದೆ; ಹಾಗಾದಲ್ಲಿ, ಈ ಯೋಜನೆಗೆ ಎಷ್ಟು ಅನುದಾನ ಬಿಡುಗಡೆಯಾಗಿದೆ; ಈ ಯೋಜನೆಯ ಹೆಸರೇನು; ಈ ಕಾಮಗಾರಿ ಯಾವಾಗ ಆರಂಭವಾಗುತ್ತದೆ; (ವಿವರ ನೀಡುವುದು) | ಚಿಕ್ಕಮಗಳೂರು ವಿಭಾಗದಲ್ಲಿ ಕಾಡಾನೆ ಹಾವಳಿ ತಡೆಯಲು ಆನೆಯೋಜನೆ ಮತ್ತು ಮಾನವ-ಪ್ರಾಣಿ ಸಂಘರ್ಷ ಯೋಜನೆ ರೂಪಿಸಲಾಗಿದೆ ಹಾಗೂ ಸದರಿ ಯೋಜನೆಗಳಿಗೆ 2016–17ನೇ ಸಾಲಿನಿಂದ ಬಿಡುಗಡೆಗೊಳಿಸಲಾದ ಅನುದಾನದ ವಿವರ ಈ ಕೆಳಕಂಡಂತಿದೆ: (see table below) |

| ಕ್ರ ಸಂ. | ವರ್ಷ | ಶೀರ್ಷಿಕೆ | ಬಿಡುಗಡೆಗೊಳಿಸಿದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1. | 2016–17 | ಆನೆ ಯೋಜನ | 5.322 |
| | | MAC | 25.100 |
| 2. | 2017–18 | ಆನೆ ಯೋಜನ | 10.080 |
| | | MAC | 12.808 |
| 3. | 2018–19 | ಆನೆ ಯೋಜನೆ | 19.290 |
| | | MAC | 38.920 |
| 4. | 2019–20 | ಆನೆ ಯೋಜನೆ | 11.300 |
| | | MAC | 73.327 |
| 5. | 2020–21 | ಆನೆ ಯೋಜನ | 2.900 |
| | | MAC | 16.090 |
| ಒಟ್ಟು | | ಆನೆ ಯೋಜನ | **48.892** |
| | | **MAC** | **166.245** |

ಮೇಲ್ಕಂಡ ಕಾಮಗಾರಿಗಳು ಆಯಾ ಆರ್ಥಿಕ ವರ್ಷಗಳ ಪ್ರಾರಂಭದಿಂದ ಆರಂಭವಾಗುತ್ತವೆ.

ಯೋಜನೆಯ ಹೆಸರು: **Man-Animal Conflict Measures** (2406-02-110- Wildlife Preservation-0-54-Nature Conservation, Wildlife Habitat Management & Man -Animal Conflict Measures - 139 Major Work). ಈ ಕಾಮಗಾರಿಯನ್ನು ಮಳೆಗಾಲ ಮುಗಿದ ನಂತರ ಪ್ರಾರಂಭಿಸಲಾಗುವುದು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಈ ಯೋಜನೆ ಯಾವ ಯಾವ ಭಾಗದಲ್ಲಿ ಅನುಷ್ಠಾನವಾಗುತ್ತದೆ; (ವಿವರ ನೀಡುವುದು) | ಚಿಕ್ಕಮಗಳೂರು ವೃತ್ತ ವ್ಯಾಪ್ತಿಗೆ ಸಂಬಂಧಿಸಿದಂತೆ ಈ ಕೆಳಕಂಡ ಪ್ರದೇಶಗಳಲ್ಲಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದೆ. |

| ಕ್ರ.ಸಂ. | ವಿಭಾಗ | ವಲಯ |
|---|---|---|
| 1 | ಚಿಕ್ಕಮಗಳೂರು | ಮೂಡಿಗೆರೆ |
| 2 | | ಕಡೂರು |
| 3 | | ಚಿಕ್ಕಮಗಳೂರು |
| 4 | | ಮುತ್ತೋಡಿ |
| 5 | | ಆಲ್ದೂರು |
| 6 | ಕೊಪ್ಪ | ಕೊಪ್ಪ |
| 7 | | ಶೃಂಗೇರಿ |
| 8 | | ಮೂಡಿಗೆರೆ |
| 9 | | ನರಸಿಂಹರಾಜಪುರ |